# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1556 (1898)
2. ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
3. ಉತ್ತರಿಸುವ ದಿನಾಂಕ : 15.03.2022
4. ಉತ್ತರಿಸುವ ಸಚಿವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೆ.ಐ.ಎ.ಡಿ.ಬಿ ವತಿಯಿಂದ ಮೈಸೂರಿನ ಫ್ಲಾಟ್ ನಂ. 58, ಹೆಬ್ಬಾಳ 2ನೇ ಹಂತ, ಮೆ: ಆಪ್ಟೋ ಸರ್ಕ್ಯೂಟ್ ಸಂಸ್ಥೆಗೆ 5 ಎಕರೆ ನಿವೇಶನವನ್ನು ಯಾವಾಗ ಹಂಚಿಕೆ ಮಾಡಲಾಯಿತು; (ಪೂರ್ಣ ವಿವರ ನೀಡುವುದು) | ಮೈಸೂರು ಜಿಲ್ಲೆ, ಹೆಬ್ಬಾಳು ಕೈಗಾರಿಕಾ ಪ್ರದೇಶ, 2ನೇ ಹಂತದ ನಿವೇಶನ ಸಂಖ್ಯೆ: 58ರಲ್ಲಿ 5-00 ಎಕರೆ ಜಮೀನನ್ನು ಮೆ॥ ಆಪ್ಟೋ ಸರ್ಕ್ಯೂಟ್ (ಇಂಡಿಯಾ) ಲಿ.ರವರಿಗೆ ದಿನಾಂಕ: 09.12.2005 ರಂದು ಹಂಚಿಕೆ ಮಾಡಲಾಗಿದೆ. |
| (ಆ) | ಸದರಿ ಸಂಸ್ಥೆಯು ಕೆ.ಐ.ಎ.ಡಿ.ಬಿ.ಯ ಹಂಚಿಕೆ ನಿಯಮಗಳನ್ನು ಪಾಲಿಸದೆ, ನಿಗದಿತ ಸಮಯದಲ್ಲಿ ಉದ್ದೇಶಿತ ಯೋಜನೆಯನ್ನು ಪೂರ್ಣಗೊಳಿಸದಿರುವುದರಿಂದ ಸದರಿ ಸಂಸ್ಥೆಗೆ ಯಾವಾಗ 34-ಬಿ ಅಡಿಯಲ್ಲಿ ನೋಟೀಸ್ ನೀಡಲಾಗಿದೆ; (ವಿವರ ನೀಡುವುದು) | ಹಂಚಿಕೆದಾರರು ನಿಗದಿತ ಅವಧಿಯೊಳಗೆ ಯೋಜನೆಯನ್ನು ಅನುಷ್ಠಾನಗೊಳಿಸದ ಕಾರಣ, ಕೆ.ಐ.ಎ.ಡಿ. ಕಾಯ್ದೆ 1966ರ ಕಲಂ 34-ಬಿ ರಡಿ ದಿನಾಂಕ: 10.11.2020 ರಂದು ನೋಟೀಸ್ ನೀಡಲಾಗಿದೆ. |
| (ಇ) | ನೋಟೀಸ್ ಸಂಬಂಧ ಹಂಚಿಕೆಯನ್ನು ರದ್ದುಪಡಿಸಿ, ನಿಯಮಾನುಸಾರ ಕ್ರಮ ಕೈಗೊಳ್ಳದೆ, ನಿಯಮಬಾಹಿರವಾಗಿ ಸದರಿ ನಿವೇಶನವನ್ನು ಮೆ: ಬೆಸ್ಟ್ ಕೋರ್ಗೇಟೆಡ್ ಸಂಸ್ಥೆಗೆ ಯಾವಾಗ ಹಂಚಿಕೆ ಮಾಡಲಾಯಿತು; (ವಿವರ ನೀಡುವುದು) | ಕಾರ್ಯಪಾಲಕ ಅಭಿಯಂತರ, ಕೆ.ಐ.ಎ.ಡಿ.ಬಿ., ಮೈಸೂರು ಇವರ ದಿನಾಂಕ: 03.09.2020ರ ವರದಿಯಲ್ಲಿ ಹಂಚಿಕೆದಾರರು ಶೇಕಡಾ 4.64 ರಷ್ಟು ಜಮೀನನ್ನು ಉಪಯೋಗಿಸಿಕೊಂಡಿದ್ದ ಕಾರಣ, ದಿನಾಂಕ: 12.11.2020ರಂದು ಆಪ್ಟೋ ಸರ್ಕ್ಯೂಟ್ ರವರಿಗೆ ಕೆ.ಐ.ಎ.ಡಿ. ಕಾಯ್ದೆ 1966ರ ಕಲಂ 34-ಬಿ ರಡಿ ನೋಟೀಸ್ ನೀಡಿದ್ದು, ಕಂಪನಿಯು ದಿನಾಂಕ: 05.02.2021ರಂದು ವೈಯುಕ್ತಿಕ ವಿಚಾರಣೆಗೆ ಹಾಜರಾಗಿ, ಹಂಚಿಕೆ ಪಡೆದ ಜಮೀನಿನಲ್ಲಿ ಯೋಜನೆ ಅನುಷ್ಠಾನಗೊಳಿಸಲು |
| (ಈ) | ನಿಯಮ ಉಲ್ಲಂಘಿಸಿ, ಕೆ.ಐ.ಎ.ಡಿ.ಬಿ ಅಧಿಕಾರಿಗಳು ಸಂಸ್ಥೆಗೆ ಕೋಟ್ಯಾಂತರ ರೂಪಾಯಿ ನಷ್ಟ ಉಂಟು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |

| | | |
|---|---|---|
| (ಉ) | ಬಂದಿದ್ದಲ್ಲಿ, ಸದರಿ ಅಧಿಕಾರಿಗಳ ವಿರುದ್ಧ ಮತ್ತು ಹಂಚಿಕೆ ರದ್ದು ಪಡಿಸುವಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? | ರೂ.3.48 ಕೋಟಿಗಳನ್ನು ವೆಚ್ಚ ಮಾಡಿದ್ದು, ಈ ಜಮೀನಿನಲ್ಲಿ ವಿಶೇಷ ಆರ್ಥಿಕ ವಲಯವನ್ನು ಸ್ಥಾಪಿಸಲು ಕ್ರಮ ಕೈಗೊಂಡಿರುವುದಾಗಿ ತಿಳಸುತ್ತಾ, ಹಂಚಿಕೆಯಾದ ಜಮೀನಿನ ಭೂಮಾಲೀಕರು ನ್ಯಾಯಾಲಯದಲ್ಲಿ ದಾಖಲಿಸಿದ್ದ ಪ್ರಕರಣಗಳಿಂದಾಗಿ ಯೋಜನೆಯನ್ನು ಅನುಷ್ಠಾನಗೊಳಿಸಲು ವಿಳಂಬವಾದ ಕಾರಣ, ಹೆಚ್ಚಿನ ಕಾಲಾವಕಾಶ ನೀಡುವಂತೆ ಕೋರಿದ್ದರ ಮೇರೆಗೆ, ದಿನಾಂಕ: 15.02.2021ರಂದು ಅಂತಿಮವಾಗಿ ಶೇಕಡಾ 10ರಷ್ಟು ದಂಡದ ಮೊತ್ತ ರೂ.6,80,000/-ಗಳನ್ನು ಪಾವತಿಸಿಕೊಳ್ಳುವ ಷರತ್ತಿಗೆ ಒಳಪಟ್ಟು 12 ತಿಂಗಳ ಹೆಚ್ಚುವರಿ ಕಾಲಾವಕಾಶವನ್ನು ನೀಡಲಾಗಿದೆ ಹಾಗೂ ದಂಡದ ಮೊತ್ತ ಪಾವತಿಸುವಂತೆ ಕೋರಿ ಆಪ್ಟೋ ಸರ್ಕ್ಯೂಟ್.ರವರಿಗೆ ದಿನಾಂಕ: 18.02.2021ರಂದು ಪತ್ರ ಬರೆಲಾಗಿದೆ.<br><br>ಆಪ್ಟೋ ಸರ್ಕ್ಯೂಟ್ ಕಂಪನಿಯು ದಿನಾಂಕ: 24.05.2021ರಂದು ಮಂಡಳಿಗೆ ಬರೆದ ಪತ್ರದಲ್ಲಿ ತಮಗೆ ಹಂಚಿಕೆಯಾಗಿರುವ ಜಮೀನಿನ ಗುತ್ತಿಗೆ ಹಕ್ಕನ್ನು ಮೆ॥ ಬೆಸ್ಟ್ ಕಾರುಗೇಟಸ್ರ್ ಇವರಿಗೆ ವರ್ಗಾಯಿಸಲು ಕೋರಿದ್ದು, ಕಾರ್ಯಪಾಲಕ ಅಭಿಯಂತರ, ಕೆ.ಐ.ಎ.ಡಿ.ಬಿ., ಮೈಸೂರು ಇವರ ದಿನಾಂಕ: 21.06.2021ರ ವರದಿಯಲ್ಲಿ ಹಂಚಿಕೆಯಾದ ಜಮೀನಿನಲ್ಲಿ ಶೇಕಡಾ 4.64ರಷ್ಟು ಜಮೀನನ್ನು ಕಟ್ಟಡ ನಿರ್ಮಾಣಕ್ಕಾಗಿ ಹಾಗೂ ಶೇಕಡಾ 28.99ರಷ್ಟು ಜಮೀನನ್ನು ರಸ್ತೆ, ಉದ್ಯಾನವನ ಹಾಗೂ ವಾಹನ ನಿಲುಗಡೆಗಳನ್ನು ಒಳಗೊಂಡಂತೆ ಒಟ್ಟು ಶೇಕಡಾ 33.63ರಷ್ಟು ಜಮೀನನ್ನು ಉಪಯೋಗಿಸಿರುವುದಾಗಿ ತಿಳಸಿರುತ್ತಾರೆ.<br><br>ಆಪ್ಟೋ ಸರ್ಕ್ಯೂಟ್ ಕಂಪನಿಯು ಸದರಿ ಜಮೀನಿನಲ್ಲಿ ಹೂಡಿರುವ ಬಂಡವಾಳದ ಕುರಿತು ಚಾರ್ಟೆಡ್ ಅಕೌಂಟೆಂಟ್ ಇವರಿಂದ ಪ್ರಮಾಣೀಕರಿಸಿ ಸಲ್ಲಿಸಿದ ಬಂಡವಾಳ ಹೂಡಿಕೆ |

| | | |
|---|---|---|
| | | ಪ್ರಮಾಣ ಪತ್ರವನ್ನು ಕೆ.ಐ.ಎ.ಡಿ.ಬಿ.ಯ ಆಂತರಿಕ ಲೆಕ್ಕ ಪರಿಶೋಧನಾ ವಿಭಾಗದಲ್ಲಿ ಪರಿಶೀಲಿಸಿ, ಹಂಚಿಕೆದಾರರಿಂದ ರೂ.2,11,18,665/-ಗಳನ್ನು ಪಾವತಿಸಿಕೊಂಡು, ಗುತ್ತಿಗೆ ಹಕ್ಕನ್ನು ವರ್ಗಾಯಿಸಲು ಕ್ರಮ ವಹಿಸಲು ದಿನಾಂಕ: 05.07.2021ರಂದು ತಿಳಿಸಿರುತ್ತಾರೆ.<br><br>ಆಪ್ಟೋ ಸರ್ಕ್ಯೂಟ್ ಕಂಪನಿಗೆ ಹಂಚಿಕೆ ಮಾಡಿರುವ ಸಮಯದಲ್ಲಿನ ಗುತ್ತಿಗೆ ಹಕ್ಕಿನ ವರ್ಗಾವಣೆ ಕುರಿತು ಪಾಲಿಸಬೇಕಾದ ನಿಯಮಗಳು ಈ ಕೆಳಕಂಡಂತಿದೆ:-<br><br>a) 25% of difference between the allotted price and the price in vogue, at the time of considering such requests, if the cost of land allotted is less than 20% of the investment made on the project excluding the land cost, which should be evidenced by a certificate from the Financial Institutions or from the Chartered Accountants;<br>b) 75% of the difference between the allotted price and the price in vogue at the time of considering such requests if the cost of land allotted is more than 20% of the investment made on the project excluding in the land cost, which should be evidenced by a certificate from the Financial Institutions or from the Chartered Accountants;<br>c) 10% of the land cost paid by the original allottee as transferring charges;<br><br>ಹಂಚಿಕೆ ಪತ್ರದ Standard Conditions-10 ರಂತೆ ಹಕ್ಕು ವರ್ಗಾವಣೆ ನಿಯಮ-10(ಎ) ರಡಿ ರೂ.2,11,18,665/-ಗಳನ್ನು ಪಾವತಿಸಿಕೊಂಡು, ಮೆ|| ಬೆಸ್ಟ್ ಕಾರುಗೇಟರ್ಸ್ ಇವರಿಗೆ ಗುತ್ತಿಗೆ ಹಕ್ಕನ್ನು ನಿಯಮಾನುಸಾರ ವರ್ಗಾವಣೆ ಮಾಡಲಾಗಿದೆ. |

ಸಂಖ್ಯೆ: ಸಿಐ 75 ಐಎಪಿ(ಇ) 2022

(ಡಾ|| ಮುರುಗೇಶ ಆರ್. ನಿರಾಣಿ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು